# ಪ್ರಶ್ನೆಗಳೇ ಉತ್ತರಗಳಾದಾಗ

- ಶ್ರೀಸಿಂಗ್ ಕುರಿಯಲ್

ನಾವು ಪರಿಕಲ್ಪನೆಗಳನ್ನು, ಸನ್ನಿವೇಶಗಳನ್ನು ಮತ್ತು ಕಲ್ಪನೆಗಳನ್ನು ಹೇಗೆ ಅರ್ಥ ಮಾಡಿಕೊಂಡಿದ್ದೇವೆ ಎಂಬುದನ್ನು ಪ್ರಶ್ನೆಗಳು ಪ್ರಶ್ನಿಸುತ್ತವೆ. ಈ ಬಗ್ಗೆ ಯಾವ ಪ್ರಶ್ನೆಯೂ ಇಲ್ಲ. ಮಕ್ಕಳು ಉತ್ತರ ಕಂಡುಕೊಳ್ಳುವಂತೆ ಮಾಡಲು ಕಿಂರ್ಝೊಮ್ ಖಂಪಾ ಎಂಬ ಶಿಕ್ಷಕ, ಪ್ರಶ್ನೆಯ ಸಾಧನವನ್ನು ಬಳಸಿದರು.

ಪ್ರಸ್ತುತ, ಉತ್ತರಕಾಶಿಯ ಜಿಐಸಿ ಪುಜಾರ್ ಗಾಂವ್‌ನಲ್ಲಿ ಐದು ವರ್ಷಗಳಿಂದ ಇಂಗ್ಲಿಷ್ ಶಿಕ್ಷಕಿಯಾಗಿರುವ ಕಿಂರ್ಝೊಮ್, ಈ ನಿರ್ಣಯಕ್ಕೆ ಬರಲು ದೊಡ್ಡ ದೊಡ್ಡ ಅಕಾಡೆಮಿಕ್ ಸಂಶೋಧನಾ ಸಾಹಿತ್ಯವನ್ನೇನು ಓದಬೇಕಿರಲಿಲ್ಲ. ತನ್ನ ವಿದ್ಯಾರ್ಥಿಗಳು ಇಂಗ್ಲಿಷ್ ವಿಷಯದಲ್ಲಷ್ಟೇ ಅಲ್ಲದೆ, ಎಲ್ಲ ವಿಷಯಗಳಲ್ಲೂ ಪರಿಣತರಾಗಬೇಕು ಎಂಬ ಅವರ ಉತ್ಸಾಹವೇ, ಪ್ರಶ್ನೆಗಳ ಸಾಮರ್ಥ್ಯವನ್ನು ಅವರಿಗೆ ಮನವರಿಕೆ ಮಾಡಿಸಿತು.

ಕಿಂರ್ಝೊಮ್ ಅವರ ತರಗತಿಯಲ್ಲಿ, ತಾವು ಏನು ಕೇಳಿದರೂ ಮಕ್ಕಳು ಸಲೀಸಾಗಿ ಉತ್ತರಿಸುತ್ತಿದ್ದುದನ್ನು ಕಂಡು ಅವರಿಗೆ ಬಹಳ ಖುಷಿಯಾಗಿತ್ತು. ಆದರೆ, ಆ ಮಕ್ಕಳಿಗೆ ಪಾಠದಲ್ಲಿ ಕೊಡಲಾಗಿರುವ ಸರಳ ಶಬ್ದಗಳ ಅರ್ಥ, ಬಳಕೆ ಹಾಗೂ ಅನ್ವಯವು ತಿಳಿದಿಲ್ಲವೆಂಬ ಅರಿವಾದಾಗ, ಆರಂಭದ ಕೆಲವು ವಾರಗಳ ಈ ಸಂತೋಷವು, ನಿರಾಸೆಯಲ್ಲಿ ಕೊನೆಗೊಂಡಿತು. ಪಠ್ಯಪುಸ್ತಕವೆಂಬುದು ಒಂದು ಸಾಧನವಷ್ಟೇ, ಅದು, ಕಲಿಕೆಯ ಪ್ರಕ್ರಿಯೆ ಸಾಗಲು ಬಳಕೆಯಾಗುವ, ಪರಿಪೂರ್ಣವಲ್ಲದ ಸಾಧನ ಎಂಬುದು ಅವರಿಗೆ ಮನವರಿಕೆಯಾಯಿತು. ಆಗ ಅವರು ತರಗತಿಯಲ್ಲಿ ಪ್ರಯೋಗ ಮಾಡಿ ನೋಡಲು ಶುರು ಮಾಡಿದರು. ಆಕೆ ಪಠ್ಯಪುಸ್ತಕವನ್ನು ಮುಚ್ಚಿ, ಕಕ್ಕಾಬಿಕ್ಕಿಯಾದ ಮಕ್ಕಳಿಗೆ ಅದನ್ನೇ ಮಾಡುವಂತೆ ಹೇಳಿದರು.

ಪಠ್ಯ ಪುಸ್ತಕದಲ್ಲಿನ ಒಂದೊಂದು ಪಾಠವೂ ಕೇವಲ ಒಂದು ವಿಷಯ (ಥೀಮ್), ಆಲೋಚನೆ ಮತ್ತು ಕಲ್ಪನೆಗೆ ದಿಕ್ಸೂಚಿಯಾಗಿರುತ್ತದೆ. ಪ್ರಮುಖ ಕಲ್ಪನೆಯು ಮಕ್ಕಳಲ್ಲಿ ಪ್ರಸಾರವಾಗಿ, ಅವರ ಮನಸ್ಸಿಗೆ ನಾಟಿದ ಬಳಿಕ ಎಲ್ಲವೂ ಸುಸೂತ್ರವಾಗಿ ಸಾಗುತ್ತದೆ. ಕಿಂರ್ಝೊಮ್ ಅವರು ಆರಂಭಿಸಿದ್ದು ಹೀಗೆ.

ಅವರು ತರಗತಿಯಲ್ಲಿ ಚರ್ಚೆ ಮಾಡಲಾರಂಭಿಸಿದರು. ಎಲ್ಲ ಬಗೆಯ ವಿಷಯಗಳು, ಕಲ್ಪನೆಗಳು ಮತ್ತು ಆಲೋಚನೆಗಳು ತರಗತಿಯಲ್ಲಿ ಸಂಚಲನ

ಆರಂಭಿಸಿದವು. ನಿಶ್ಚಿತವಾಗಿಯೂ, ಮಕ್ಕಳಲ್ಲಿ ಯೋಚಿಸುವ ಪ್ರಕ್ರಿಯೆಯನ್ನು ಪ್ರಚೋದಿಸಲು ಆಕೆಗೆ ಸ್ವಲ್ಪ ಸಮಯ ಹಿಡಿದರೂ, ಅನಂತರ ಅವರೆಲ್ಲರೂ ಆಲೋಚಿಸಲು ತೊಡಗಿದರಲ್ಲದೆ, ಸಂವಾದಗಳು ಆರಂಭಗೊಂಡು, ಅವರಲ್ಲಿನ ಕಲ್ಪನೆಗಳು ಅರಳಲು ಪ್ರಾರಂಭವಾದವು. ಮಕ್ಕಳಿಗೆ ಶಿಕ್ಷಕರೊಂದಿಗೆ ಮಾತನಾಡಿ ರೂಢಿಯೇ ಇರಲಿಲ್ಲ. ಇದಕ್ಕೂ ಮುಂಚೆ, ಅವರು ಮಾತಾಡುತ್ತಿದ್ದರೂ ಅದನ್ನು ಕೇಳಿಸಿಕೊಳ್ಳುವವರು ಇರಲಿಲ್ಲ. ಈಗ, ಕಿಂಝೊಮ್ ತಮ್ಮ ಅಕಾಡೆಮಿಕ್ ವರ್ಷವನ್ನು ಮಾತಿನ ಪಠ್ಯಕ್ರಮದೊಂದಿಗೆ ಆರಂಭಿಸಿದರು.

ಮಕ್ಕಳು ತಮ್ಮ ಆಲೋಚನೆಗಳನ್ನು ನಿರಾತಂಕವಾಗಿ ವ್ಯಕ್ತಪಡಿಸಲಾರಂಭಿಸಿದಾಗ, ಕಿಂಝೊಮ್ ಪ್ರಶ್ನೆಗಳ ಆಟವನ್ನು ಶುರು ಮಾಡಿದರು. ಅವರು ವಿಷಯವೊಂದನ್ನು ಪರಿಚಯಿಸುತ್ತಿದ್ದಂತೆಯೇ, ಚರ್ಚೆಯು ರೂಪುಗೊಂಡು, ಆಲೋಚನೆಗಳು ಬೇರೂರ ತೊಡಗಿದವು ಹಾಗೂ ಆ ಆಲೋಚನೆಗಳನ್ನು ಪ್ರಶ್ನಿಸಲಾಯಿತು. ಆಲೋಚನೆಗಳನ್ನು ಅತ್ಯಂತ ಸಾವಧಾನದಿಂದ ಪ್ರಶ್ನಿಸಬೇಕು ಎಂಬ ಎಚ್ಚರ ಅವರಿಗೆ ಸದಾ ಇರುತ್ತಿತ್ತು. ಇಲ್ಲದಿದ್ದಲ್ಲಿ, ಮಕ್ಕಳು ಮತ್ತೆ ತಮ್ಮ ಚಿಪ್ಪಿನೊಳಗೆ ಮುದುಡಿಕೊಳ್ಳುವ ಸಾಧ್ಯತೆಯಿದ್ದು, ಅದಕ್ಕೆ ಅವರು ಅವಕಾಶ ಕೊಡುವವರಲ್ಲ. ಆದ್ದರಿಂದ ಒಂದಿಡೀವಾರ, ಕೆಲವೊಮ್ಮೆ ಇಡೀ ತಿಂಗಳು ಒಂದು ನಿರ್ದಿಷ್ಟ ಚರ್ಚೆಗೆ ಸಂಬಂಧಿಸಿದ ಪ್ರಶ್ನೆಗಳನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಲಾಗುತ್ತದೆ. ಇದು ಕೊನೆಗೆ, ಪಠ್ಯ ಪುಸ್ತಕದಲ್ಲಿನ ಪಾಠಗಳ ಹಿಂದಿನ ಮೂಲಭೂತ ವಿಷಯಕ್ಕೆ ಸಂಚಾಲಿತಗೊಳ್ಳುತ್ತದೆ. ಮಕ್ಕಳು ಪಾಠಗಳಿಗೆ ಎಡತಾಕುವ ಮೊದಲು ಬುದ್ಧಿವಂತಿಕೆಯಿಂದ ಆಲೋಚಿಸಿದ ಪ್ರಶ್ನೆಗಳ ಸುರಿಮಳೆಯನ್ನು ಎದುರಿಸಿದ ತಾರ್ಕಿಕ ಬುದ್ಧಿವಂತಿಕೆಯಿಂದ ಸನ್ನದ್ಧರಾಗುತ್ತಿದ್ದರು.

ಮಕ್ಕಳು ಶಿಕ್ಷಕರಲ್ಲಿ ಮತ್ತು ಸಹಪಾಠಿಗಳೊಂದಿಗೆ ಪರಸ್ಪರ ಪ್ರಶ್ನೆ ಕೇಳುವಂತೆ ಉತ್ತೇಜನ ನೀಡಲಾಗುತ್ತದೆ. ತರಗತಿಯಲ್ಲಿ ಪ್ರತಿಯೊಂದು ಮಗುವಿನ ಧ್ವನಿಯನ್ನು ಆಲಿಸುವಂತಹ ಮತ್ತು ಅದಕ್ಕೆ ಗೌರವಸಿಗುವಂತಹ ಸಕಾರಾತ್ಮಕ ವಾತಾವರಣವನ್ನು ರೂಪಿಸುವ ಬಗ್ಗೆ ಕಿಂಝೊಮ್ ಅವರಿಗೆ ದೃಢವಾದ ನಂಬಿಕೆ.

ನಿಧಾನವಾಗಿ, ತನ್ನ ಪ್ರಶ್ನೆಗಳ ಭಂಡಾರದಲ್ಲಿ ಒಂದು ಸಶಕ್ತ ಆಯುಧವಿದೆ ಎಂಬ ಸಂಗತಿ ಕಿಂಝೊಮ್‌ಗೆ ಅರಿವಾಯಿತು. ಪಠ್ಯಪುಸ್ತಕದಲ್ಲಿ ರೂಢಿಗತವಾಗಿದ್ದ ಹೌದು ಅಥವಾ ಇಲ್ಲ ಎಂಬ ಸರಳ ಉತ್ತರ ಬಯಸುವ ಸೀಮಿತ ವ್ಯಾಪ್ತಿಯ ಪ್ರಶ್ನೆಗಳು, ಅರ್ಥಮಾಡಿಕೊಳ್ಳಲು

ಅನುಕೂಲಕರವಾಗಿರಲಿಲ್ಲ. ಉರು ಹೊಡೆದು ಕಲಿಯಲು ಪ್ರೇರೇಪಿಸುವ ಕಾರಣ ಕಿಂಲ್ಯೋಮ್ ಅದಕ್ಕೆ ಆಸ್ಪದ ನೀಡುತ್ತಿರಲಿಲ್ಲ. ಹಾಗಾಗಿ ಆಕೆ ಶ್ರಮವಹಿಸಿ, ಪ್ರತಿ ಪಾಠವನ್ನು ಕುರಿತು ತಮ್ಮದೇ ಆದ ಒಂದಷ್ಟು ಪ್ರಶ್ನೆಗಳನ್ನು ಸಿದ್ಧಪಡಿಸಿ, ಪ್ರತಿ ಮಗುವೂ ಪಾಠವನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಂಡಿದೆ ಎಂದು ಪರೀಕ್ಷಿಸಿದರು. ಈ ಪ್ರಕ್ರಿಯೆ, ಮಕ್ಕಳನ್ನು ಪಾಠದಿಂದಾಚೆ ಯೋಚಿಸಲು ಪ್ರೇರೇಪಿಸಿದ್ದಲ್ಲದೆ, ಪಾಠದ ಮುಂದಿನ ಹಂತಕ್ಕೆ ಅವರನ್ನು ಸಜ್ಜುಗೊಳಿಸಿತು. ಹೀಗೆ, ಮೊತ್ತಮೊದಲ ಬಾರಿಗೆ ಪ್ರಶ್ನಾರ್ಥಕ ಚಿಹ್ನೆಗಳು ಮಕ್ಕಳ ಸ್ನೇಹಿಯಾದವು!

ಅದಕ್ಕಿಂತಲೂ ಹೆಚ್ಚಾಗಿ, ಆರಂಭದಲ್ಲಿ ಸರಳವಾದ ಪ್ರಶ್ನೆಗಳನ್ನು ಕೇಳುತ್ತಾ, ಕ್ರಮೇಣ ಬೇರೆ ಬೇರೆ ಹಂತದ ಕಠಿಣ ಪ್ರಶ್ನೆಗಳನ್ನು ಕೇಳಿದರು. ಮಕ್ಕಳ ಗ್ರಹಿಕೆಯ ಸಾಮರ್ಥ್ಯವನ್ನು ಅಳೆಯುವುದು ಇದರ ಉದ್ದೇಶವಾಗಿತ್ತು. ತನಗೆ ಅರಿವೇ ಇಲ್ಲದೆ ವಾಸ್ತವಾಗಿ ಕಿಂಲ್ಯೋಮ್, ಬ್ಲೂಮ್ ವರ್ಗೀಕರಣದ ನೆಲೆಯಲ್ಲಿಯೇ ಕೆಲಸ ಮಾಡುತ್ತಿದ್ದರು. ಅಂದರೆ ಜ್ಞಾನ, ಗ್ರಹಿಕೆ, ಅನ್ವಯ, ವಿಶ್ಲೇಷಣೆ, ಸಂಯೋಗ/ಸಮನ್ವಯ ಮತ್ತು ಮೌಲ್ಯಮಾಪನ ಎಂಬ ಸಾಧನಗಳೊಂದಿಗೆ ಮಕ್ಕಳನ್ನು ಸಜ್ಜುಗೊಳಿಸಲು ಆಕೆ ಪ್ರಯತ್ನಿಸುತ್ತಿದ್ದರು.

ಇದೆಲ್ಲದರ ನಿಟ್ಟಿನಲ್ಲಿ, ಮಕ್ಕಳಿಗೆ ಪಾಠವು ಅರ್ಥವಾದಲ್ಲಿ, ಅವರು ಇಂಗ್ಲಿಷ್‌ನಲ್ಲಿ ಓದಲು (ಅರ್ಥಸಹಿತ), ಬರೆಯಲು (ಮೂಲತಃ) ಮತ್ತು ಮಾತನಾಡಲು (ಹಿಂಜರಿಕೆ ಇಲ್ಲದೆ) ಸಮರ್ಥರಾಗುತ್ತಾರೆ ಎಂಬುದು ಅವರಿಗೆ ಖಚಿತವಿತ್ತು.

ಗಂಭೀರ ಆಲೋಚನೆ, ಉತ್ತಮ ಸಂವಹನದ ಕೌಶಲಗಳನ್ನು ಪೋಷಿಸಲು, ಮಕ್ಕಳಲ್ಲಿ ಕ್ರಿಯಾಶೀಲತೆಯನ್ನು ವೃದ್ಧಿಸಲು ಹಾಗೂ ಅವರನ್ನು ಒಳ್ಳೆಯ ಶ್ರೋತೃಗಳಾಗಿಸಲು ಪ್ರಶ್ನೆಗಳು ಸಮರ್ಥ ಸಾಧನವೆಂಬುದು ಕಿಂಲ್ಯೋಮ್ ಅವರ ನಂಬಿಕೆ. ಅವರ ತರಗತಿಯಲ್ಲಿ ಮಕ್ಕಳು ಆತ್ಮವಿಶ್ವಾಸದಿಂದ ಮಾತನಾಡುವುದು ಮತ್ತು ಹೆದರಿಕೆ ಇಲ್ಲದೆ ಪ್ರಶ್ನೆಗಳನ್ನು ಕೇಳುವುದೇ ಇದಕ್ಕೆ ಸಾಕ್ಷಿ. ಕಿಂಲ್ಯೋಮ್‌ಗೆ ಪ್ರತಿಬಾರಿಯೂ ನಿಗದಿತ ಸಮಯಕ್ಕೆ ಸಿಲಬಸ್ ಪೂರ್ತಿಗೊಳಿಸಲು ಸಾಧ್ಯವಾಗದೇ ಇರಬಹುದು ಆದರೆ ತಮ್ಮ ವಿದ್ಯಾರ್ಥಿಗಳು ವಿವೇಕದಿಂದ ಪ್ರಶ್ನೆಗಳನ್ನು ಕೇಳಬಲ್ಲರು ಮತ್ತು ತಮಗೆ ಅದೇ ದೊಡ್ಡ ಪುರಸ್ಕಾರ ಎಂಬುದು ಅವರಿಗೆ ಗೊತ್ತು.

ಈ ಲೇಖನವು 2018ರ ಮಾರ್ಚ್ ತಿಂಗಳ 'ಟೀಚರ್ಸ್ ಪ್ಲಸ್'ನಲ್ಲಿ ಕೂಡಾ ಪ್ರಕಟವಾಗಿದೆ. (http://www.teacherplus.org/ profile/when-questions-turn-into-answers)

**ಶ್ರೀಸಿಂಗ್ ಕುರಿಯಲ್ ಅವರು, ಉತ್ತರಾಖಂಡದ ಉತ್ತರಕಾಶಿಯಲ್ಲಿನ ಅಜೀಂಪ್ರೇಮ್‌ಜಿ ಫೌಂಡೇಷನ್‌ನಲ್ಲಿ ಇಂಗ್ಲಿಷ್ ವಿಷಯದ ಸಂಪನ್ಮೂಲ ವ್ಯಕ್ತಿ ಹಾಗೂ ಆ ವಿಷಯದಲ್ಲಿ ಶಿಕ್ಷಕರ ತರಬೇತಿಯಲ್ಲಿ ನೆರವಾಗುತ್ತಾರೆ. ಅವರ ಕೆಲಸದ ಭಾಗವಾಗಿ, ಸರ್ಕಾರಿ ಶಾಲೆಗಳಿಗೆ ಭೇಟಿನೀಡಿ, ತಳಮಟ್ಟದ ನಿಟ್ಟಿನ ದ್ವಿತೀಯ ಭಾಷೆಯ ಅದರಲ್ಲೂ ಮುಖ್ಯವಾಗಿ ಇಂಗ್ಲಿಷ್ ಭಾಷೆಯ ಅರ್ಜನೆಯನ್ನು ಕುರಿತ ತಮ್ಮ ಗ್ರಹಿಕೆಯನ್ನು ಸುಧಾರಿಸಲು ಪ್ರಯತ್ನಿಸುತ್ತಾರೆ.**

ಶ್ರೀ ಅವರ ಸಂಪರ್ಕ: shree.kuriyal@azimpremjifoundation.org